KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೯, ೨೦೦೬ (ಆಶ್ವಯುಜ ೨೭, ಶಕ ವರ್ಷ ೧೯೨೮) | ಸಂಚಿಕೆ ೪೨ |
| --- | --- | --- |

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರ ಕಛೇರಿ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು**

**ಸಂಖ್ಯೆ: Comp:9:03–04, ದಿನಾಂಕ:25ನೇ ಸೆಪ್ಟೆಂಬರ್, 2006**

**ಅಡಕ: ಎರಡು, ಗಣಕೀಕರಣ**

**ಸುತ್ತೋಲೆ ಸಂಖ್ಯೆ:13**

**ವಿಷಯ:** ಕಾವೇರಿ ಸಾಫ್ಟ್‌ವೇರ್‌ದಲ್ಲಿ ದಸ್ತಾವೇಜುಗಳನ್ನು ನೊಂದಾಯಿಸಿದ ನಂತರ ಸ್ಕ್ಯಾನ್ ಮಾಡಿದ ಛಾಯಾ ಪ್ರತಿಗಳನ್ನು ಕಡ್ಡಾಯವಾಗಿ ಪರಿಶೀಲನೆ ಮಾಡುವ ಕುರಿತು.

ಕಾವೇರಿ ಸಾಫ್ಟ್‌ವೇರ್‌ದಲ್ಲಿ ನೋಂದಾದ ದಸ್ತಾವೇಜುಗಳನ್ನು ನಾಲ್ಕು ಪ್ರತಿ ಸಿ.ಡಿ.ಗಳಲ್ಲಿ ಸಂಗ್ರಹಿಸಲಾಗುತ್ತಿದೆ. ಹೀಗೆ ಸಂಗ್ರಹಿಸಲಾಗುವ ಸಿ.ಡಿ. ಗಳಲ್ಲಿ ಕೆಲವು ದಸ್ತಾವೇಜುಗಳ ಛಾಯಾ ಪ್ರತಿಗಳು ಕಂಡು ಬರುತ್ತಿಲ್ಲವೆಂದು ತಿಳಿದು ಬಂದಿರುತ್ತದೆ. ನೋಂದಾಯಿಸಲ್ಪಟ್ಟ ಸಾರ್ವಜನಿಕರ ದಸ್ತಾವೇಜುಗಳ ಯಾವುದೇ ಮಾಹಿತಿ ತಪ್ಪಿಹೋಗದಂತೆ ಸಿ.ಡಿ.ಗಳಲ್ಲಿ ಸಂಗ್ರಹಿಸಿಟ್ಟು ಸಾರ್ವಜನಿಕರು ಕೇಳಿದಾಗ ಅದರ ಪ್ರತಿಗಳನ್ನು ದೃಢೀಕರಿಸಿ ನೀಡುವುದು ಇಲಾಖೆಯ ಜವಾಬ್ದಾರಿಯಾಗಿದ್ದು, ಇದೊಂದು ಬಹುಮುಖ್ಯ ಕರ್ತವ್ಯವಾಗಿರುತ್ತದೆ. ಆದ್ದರಿಂದ ಪ್ರತಿಯೊಂದು ಸಿ.ಡಿ.ಯನ್ನು ಯಾವುದೇ ದಸ್ತಾವೇಜು ಅಥವಾ ಯಾವುದೇ ಪುಟವು ಸ್ಕ್ಯಾನ್ ಆಗದೇ ಬಿಟ್ಟು ಹೋಗಿಲ್ಲ ಎಂಬ ಬಗ್ಗೆ ದೃಢಪಡಿಸಿಕೊಳ್ಳುವುದು ಅವಶ್ಯವಿರುತ್ತದೆ.

ಕಾವೇರಿ ಗಣಕ ಯಂತ್ರಗಳಿಂದ ದಸ್ತಾವೇಜುಗಳನ್ನು ನೋಂದಾಯಿಸಿದ ನಂತರ ದಸ್ತಾವೇಜಿನ ಎಲ್ಲಾ ಪುಟಗಳನ್ನು ಸ್ಕ್ಯಾನ್ ಮಾಡುವುದು ಉಪನೋಂದಣಾಧಿಕಾರಿಯವರ ಮುಖ್ಯ ಕರ್ತವ್ಯ ಹಾಗೂ ಜವಾಬ್ದಾರಿಯಾಗಿರುತ್ತದೆ. ಈ ಕಾರ್ಯಕ್ಕಾಗಿ ಕಛೇರಿಯ ದ್ವಿತೀಯ ದರ್ಜೆ ಸಹಾಯಕ/ ಪ್ರಥಮ ದರ್ಜೆ ಸಹಾಯಕರವರನ್ನು ಈ ಕಾರ್ಯ ನಿರ್ವಹಿಸಲು ಉಪನೋಂದಣಾಧಿಕಾರಿಗಳು ಕಛೇರಿ ಆದೇಶ ಹೊರಡಿಸತಕ್ಕದ್ದು. ದಸ್ತಾವೇಜನ್ನು ನೋಂದಾಯಿಸಿ ಪಕ್ಷಕಾರರುಗಳಿಗೆ ಹಿಂದಿರುಗಿಸುವ ಪೂರ್ವದಲ್ಲಿ ಸ್ಕ್ಯಾನ್ ಮಾಡಿದ ದಸ್ತಾವೇಜಿನ ಪುಟಗಳ ಪರಿಶೀಲನಾ ಕಾರ್ಯ ಕೈಗೊಳ್ಳಬೇಕಾಗಿರುತ್ತದೆ. ದಸ್ತಾವೇಜನ್ನು ಕಂಪ್ಯೂಟರ್ ಆಪರೇಟರ್‌ಗಳು ಸ್ಕ್ಯಾನ್ ಮಾಡಿದ ನಂತರ ದ್ವಿತೀಯ ದರ್ಜೆ ಸಹಾಯಕ/ ಪ್ರಥಮ ದರ್ಜೆ ಸಹಾಯಕರವರು ದಸ್ತಾವೇಜು ಪುಟಗಳೊಂದಿಗೆ ಸ್ಕ್ಯಾನ್ ಮಾಡಿದ ಪುಟಗಳನ್ನು ಪರಿಶೀಲಿಸಿ ತಾಳೆ ಮಾಡುವುದು ಅತ್ಯವಶ್ಯಕವಿರುತ್ತದೆ. ದಸ್ತಾವೇಜಿನ ಯಾವುದೇ ಪುಟವು ಸ್ಕ್ಯಾನ್ ಆಗಿಲ್ಲದಿದ್ದಲ್ಲಿ ಆ ಕ್ಷಣದಲ್ಲಿಯೇ ಸೇವ್ ಆಗುವ ಮೊದಲೇ ಅದನ್ನು ಸ್ಕ್ಯಾನ್ ಮಾಡಬೇಕಾಗಿರುತ್ತದೆ. ಹೀಗೆ ಸ್ಕ್ಯಾನ್ ಮಾಡಿದ ಬಗ್ಗೆ ಪರಿಶೀಲನೆ ಕೈಗೊಂಡು ದಸ್ತಾವೇಜಿನ ಎಲ್ಲಾ ಪುಟಗಳು ಸ್ಕ್ಯಾನ್ ಮಾಡಲ್ಪಟ್ಟಿವೆ ಎಂಬ ಬಗ್ಗೆ ದ್ವಿತೀಯ ದರ್ಜೆ ಸಹಾಯಕ/ ಪ್ರಥಮ ದರ್ಜೆ ಸಹಾಯಕ ಹಾಗೂ ಉಪ ನೋಂದಣಾಧಿಕಾರಿಯವರು, ಪಕ್ಷಕಾರರು ದಸ್ತಾವೇಜನ್ನು ಪಡೆದುಕೊಂಡ ಬಗ್ಗೆ ನೀಡುವ 'ಸ್ವೀಕೃತಿಯಲ್ಲಿ ದೃಢೀಕರಿಸಬೇಕಾಗಿರುತ್ತದೆ. ತದನಂತರ ದಸ್ತಾವೇಜನ್ನು ಸಂಬಂಧಪಟ್ಟ ಪಕ್ಷಕಾರರುಗಳಿಗೆ ಹಿಂದಿರುಗಿಸಬೇಕಾಗಿರುತ್ತದೆ. ಯಾವುದೇ ದಸ್ತಾವೇಜು/ ಪುಟವು ಸ್ಕ್ಯಾನ್ ಆಗದೆ ಬಿಟ್ಟು ಹೋಗಿರುವುದು ಕಂಡುಬಂದಲ್ಲಿ ಅಂತಹ ಸಿಬ್ಬಂದಿ/ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮವನ್ನು ಜಾರಿಗೊಳಿಸಲಾಗುವುದು.

ಮೇಲ್ಕಂಡಂತೆ ಪರಿಶೀಲನೆಗೊಳಪಟ್ಟ ಸ್ಕ್ಯಾನ್ ಮಾಡಿದ ದಸ್ತಾವೇಜುಗಳನ್ನು 4 ಸೆಟ್ ಸಿ.ಡಿ.ಗಳಲ್ಲಿ ಸಂಗ್ರಹಿಸಿಡಬೇಕಾಗಿರುತ್ತದೆ. ಇಂತಹ ಸಿ.ಡಿ.ಗಳ ಎರಡು ಸೆಟ್‌ಗಳನ್ನು ಉಪ ನೋಂದಣಾಧಿಕಾರಿರವರು ಆಯಾ ಜಿಲ್ಲೆಯ ಜಿಲ್ಲಾ ನೋಂದಣಾಧಿಕಾರಿಗಳಿಗೆ ಪ್ರತಿ ತಿಂಗಳಿನ 5ನೇ ತಾರೀಖಿನೊಳಗಾಗಿ ಇದರೊಂದಿಗೆ ಲಗತ್ತಿಸಿರುವ ನಮೂನೆ-Iರ ವರದಿಯೊಂದಿಗೆ (ವರದಿ ದ್ವಿಪ್ರತಿಯಲ್ಲಿ) ಖುದ್ದಾಗಿ ಸಲ್ಲಿಸಬೇಕು. ನಮೂನೆ-Iರ ವರದಿಯ ಒಂದು ಪ್ರತಿಯನ್ನು ಹಾಗೂ ನಮೂನೆ-IIರ ಕ್ರೋಢೀಕೃತ ವರದಿಯೊಂದಿಗೆ ಸಿ.ಡಿ.ಗಳ ಒಂದೊಂದು ಸೆಟ್‌ಗಳನ್ನು ಜಿಲ್ಲಾ ನೋಂದಣಾಧಿಕಾರಿರವರು ಪ್ರತಿ ತಿಂಗಳಿನ 10ನೇ ತಾರೀಖಿನೊಳಗಾಗಿ ಕೇಂದ್ರ ಕಛೇರಿಗೆ ಖುದ್ದಾಗಿ ಸಲ್ಲಿಸಿ ಸ್ವೀಕೃತಿಯನ್ನು ಪಡೆದುಕೊಳ್ಳಬೇಕು.

ಸಿ.ಡಿ.ಗಳನ್ನು ಉಪ ನೋಂದಣಾಧಿಕಾರಿರವರು ಜಿಲ್ಲಾ ನೋಂದಣಾಧಿಕಾರಿರವರಿಗೆ ಹಾಗೂ ಜಿಲ್ಲಾ ನೋಂದಣಾಧಿಕಾರಿರವರು ಕೇಂದ್ರ ಕಛೇರಿಗೆ ಕಳುಹಿಸುವ ಪೂರ್ವದಲ್ಲಿ ಕಾವೇರಿ ಗಣಕ ಯಂತ್ರಗಳಲ್ಲಿ ಪರಿಶೀಲಿಸಿ ಎಲ್ಲಾ ದಸ್ತಾವೇಜುಗಳ ಎಲ್ಲಾ ಪುಟಗಳು ಕ್ರಮಬದ್ಧವಾಗಿ ಸ್ಕ್ಯಾನ್ ಮಾಡಲ್ಪಟ್ಟಿವೆ ಎಂಬ ಬಗ್ಗೆ ಪರಿಶೀಲಿಸಬೇಕು ಹಾಗೂ ಆ ಕುರಿತಂತೆ ದೃಢೀಕರಣವನ್ನು ನಮೂನೆ-I ಹಾಗೂ II ರಲ್ಲಿ ಕಡ್ಡಾಯವಾಗಿ ದಾಖಲಿಸಿ ಸಹಿ ಮಾಡಿ ರಬ್ಬರ್ ಮುದ್ರೆ ಹಾಕಬೇಕು.

ಯಾವುದೇ ತಿಂಗಳಿನಲ್ಲಿ ಸಿ.ಡಿ. ಕಟ್ ಮಾಡಿರದಿದ್ದಲ್ಲಿ ಮೇಲ್ಕಂಡ ನಮೂನೆಗಳಲ್ಲಿ ಆಯಾ ತಿಂಗಳುಗಳಿಗೆ ಸಂಬಂಧಿಸಿದಂತೆ 'ನಿಲ್' ವರದಿ ದಾಖಲಿಸಿ ಕಳಿಸತಕ್ಕದ್ದು.

ಈ ಸುತ್ತೋಲೆಯ ಪ್ರತಿಯು ತಲುಪಿದ ಬಗ್ಗೆ ಸ್ವೀಕೃತಿಯನ್ನು ತಪ್ಪದೇ ಕಳಿಸಲು ಸೂಚಿಸಿದೆ.

**ಸಿ. ಕೃಷ್ಣಪ್ಪ**
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ಅನುಬಂಧ-I

**ಜಿಲ್ಲಾ ನೋಂದಣಾಧಿಕಾರಿ.........................ರವರಿಗೆ....................ನೇ ಇಸವಿ ತಿಂಗಳ....................ಅಂತ್ಯಕ್ಕೆ ಕಳುಹಿಸಿದ ಸಿ.ಡಿ.ಗಳ ವಿವರ**

ಉಪ ನೋಂದಣಿ ಕಛೇರಿ ಹೆಸರು ತಿಂಗಳು: ವರ್ಷ

| ಕ್ರ. ಸಂ. | ಸಿ.ಡಿ. ಸಂಖ್ಯೆ | ಬುಕ್ I ದಸ್ತಾವೇಜು ಸಂಖ್ಯೆ | | ಬುಕ್ III ದಸ್ತಾವೇಜು ಸಂಖ್ಯೆ | | ಬುಕ್ Iv ದಸ್ತಾವೇಜು ಸಂಖ್ಯೆ | | ಬುಕ್-I ಭಾಗ-Iv ದಸ್ತಾವೇಜು ಸಂಖ್ಯೆ | | ಬುಕ್-I ಭಾಗ-V ದಸ್ತಾವೇಜು ಸಂಖ್ಯೆ | | ಷರಾ |
|---|---|---|---|---|---|---|---|---|---|---|---|---|
| | | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | ಇಂದ | ವರೆಗೆ | |
| 1 | 2 | 3(a) | 3(b) | 4(a) | 4(b) | 5(a) | 5(b) | 6(a) | 6(b) | 7(a) | 7(b) | 8 |
| | | | | | | | | | | | | |

**ಘೋಷ್ವಾರೆ**

| ಕಛೇರಿಯು ಗಣಕೀಕರಣಗೊಂಡ ನಂತರದಿಂದ ಹಿಂದಿನ ತಿಂಗಳವರೆಗೆ ಕಳುಹಿಸಿದ ಒಟ್ಟು ಸಿ.ಡಿ.ಗಳ ಸಂಖ್ಯೆ | ಪ್ರಸ್ತುತ ತಿಂಗಳು ಕಳುಹಿಸಿದ ಸಿ.ಡಿ.ಗಳ ಸಂಖ್ಯೆ | ಒಟ್ಟು ಸಿ.ಡಿ.ಗಳ ಸಂಖ್ಯೆ |
|---|---|---|
| | | |

**"ದೃಢೀಕರಣ"**

ಈ ಮೇಲೆ ನಮೂದಿಸಿದ ಸಿ.ಡಿ.ಗಳಲ್ಲಿ ಸಂಗ್ರಹಿಸಿರುವ ದಸ್ತಾವೇಜುಗಳ ಛಾಯ ಪ್ರತಿಗಳೆಲ್ಲವನ್ನು ಕಾವೇರಿ ತಂತ್ರಾಂಶದ ಕಂಪ್ಯೂಟರ್‌ನಲ್ಲಿ ಪರಿಶೀಲಿಸಲಾಗಿದ್ದು, ಎಲ್ಲಾ ದಸ್ತಾವೇಜುಗಳ ಎಲ್ಲಾ ಪುಟಗಳು ಕ್ರಮಬದ್ಧವಾಗಿ ಸ್ಕ್ಯಾನ್ ಆಗಿರುತ್ತವೆ ಹಾಗೂ ಅವುಗಳನ್ನು ನಾವು ಖುದ್ದಾಗಿ ಓದಿ ನೋಡಿ ಪರಿಶೀಲಿಸಿದ್ದೇವೆ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಸ್ಥಳ:.................... ಸಹಿ............................... ಸಹಿ..............................
ದಿನಾಂಕ:.................... (ಹೆಸರು.........................) (ಹೆಸರು........................)
ಪ್ರ.ದ.ಸ./ ದ್ವಿ.ದ.ಸ. ಉಪನೋಂದಣಾಧಿಕಾರಿ
(ರಬ್ಬರ್ ಮೊಹರು)

## ಅನುಬಂಧ-II

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರಿಗೆ..............ನೇ ಇಸವಿ .............ತಿಂಗಳ..............ಅಂತ್ಯಕ್ಕೆ ಕಳುಹಿಸಿದ ಸಿ.ಡಿ.ಗಳ ವಿವರ**

ಜಿಲ್ಲಾ ನೋಂದಣಿ ಕಛೇರಿ ಹೆಸರು ತಿಂಗಳು:

| ಕ್ರ. ಸಂ. | ಉಪನೋಂದಣಿ ಕಛೇರಿ ಹೆಸರು | ಹಿಂದಿನ ತಿಂಗಳ ಅಂತ್ಯದವರೆಗೆ ಕಳುಹಿಸಿದ ಸಿ.ಡಿ.ಗಳ ಸಂಖ್ಯೆ | ಪ್ರಸ್ತುತ ತಿಂಗಳಿನಲ್ಲಿ ಕಳುಹಿಸಿದ ಸಿ.ಡಿ.ಗಳ ಸಂಖ್ಯೆ | ಒಟ್ಟು ಸಿ.ಡಿ.ಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| | | | | |
| | | | | |
| **ಒಟ್ಟು** | | | | |

**"ದೃಢೀಕರಣ"**

ಈ ಮೇಲೆ ನಮೂದಿಸಿದ ಸಿ.ಡಿ.ಗಳಲ್ಲಿ ಸಂಗ್ರಹಿಸಿರುವ ದಸ್ತಾವೇಜುಗಳ ಛಾಯ ಪ್ರತಿಗಳೆಲ್ಲವನ್ನು ಕಾವೇರಿ ತಂತ್ರಾಂಶದ ಕಂಪ್ಯೂಟರ್‌ನಲ್ಲಿ ಪರಿಶೀಲಿಸಲಾಗಿದ್ದು, ಎಲ್ಲಾ ದಸ್ತವೇಜುಗಳ ಎಲ್ಲಾ ಪುಟಗಳು ಕ್ರಮಬದ್ಧವಾಗಿ ಸ್ಕ್ಯಾನ್ ಆಗಿರುತ್ತವೆ ಹಾಗೂ ಅವುಗಳನ್ನು ನಾವು ಖುದ್ದಾಗಿ ಓದಿ ನೋಡಿ ಪರಿಶೀಲಿಸಿದ್ದೇವೆ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಸ್ಥಳ:.................... ಸಹಿ.............................. ಸಹಿ............................

ದಿನಾಂಕ:.................... (ಹೆಸರು.........................) (ಹೆಸರು........................)

ಪ್ರ.ದ.ಸ./ ದ್ವಿ.ದ.ಸ. ಜಿಲ್ಲಾ ನೋಂದಣಾಧಿಕಾರಿ

(ರಬ್ಬರ್ ಮೊಹರು)

**ಸಿ. ಕೃಷ್ಣಪ್ಪ**

ಪಿ.ಆರ್. 1283 ನೋಂದಣಿ ಮಹಾಪರಿವೀಕ್ಷಕರು ಮತ್ತು

ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಸೇರ್ಪಡೆ

**ಸಂಖ್ಯೆ: ಸಿಆಸುಇ 16 ಹೆಚ್‌ಹೆಚ್‌ಎಲ್ 2007, ಬೆಂಗಳೂರು, ದಿನಾಂಕ:26ನೇ ಸೆಪ್ಟೆಂಬರ್, 2007**

ರಾಜ್ಯದಲ್ಲಿಯ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆ ಪ್ರಯುಕ್ತ ದಿನಾಂಕ:28.09.2007 ರಂದು ರಜೆ ಘೋಷಿಸಿ ಹೊರಡಿಸಿದ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 16 ಹೆಚ್‌ಹೆಚ್‌ಎಲ್ 2007 ದಿನಾಂಕ: 18.09.2007ರ ಪುಟ 4ರಲ್ಲಿ ಕ್ರ.ಸಂ.14 ಉಡುಪಿ ಜಿಲ್ಲೆ, ಕ್ರ.ಸಂ.83 ಕಾರ್ಕಳ ಪುರಸಭೆ ಕೆಳಗೆ 83(ಎ) ಸಾಲಿಗ್ರಾಮ ಪಟ್ಟಣ ಪಂಚಾಯತಿ ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು ಹಾಗೂ ಚುನಾವಣೆ ನಡೆಯುವ ಪ್ರದೇಶಗಳಲ್ಲಿ ಇರುವ ಖಾಸಗಿ ಸಂಸ್ಥೆಗಳು, ಕೈಗಾರಿಕೆಗಳು ಮತ್ತು ವಾಣಿಜ್ಯ ಘಟಕಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕರುಗಳಿಗೆ ಮತದಾನದ ದಿನ ಮತದಾನ ಮಾಡಲು 3 ಘಂಟೆಗಳ ಕಾಲಾವಕಾಶ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಸುಧಾಕರ್**

ಪಿ.ಆರ್. 1264 ವಿಶೇಷಾಧಿಕಾರಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ

## ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು–560 001

### ಪ್ರಕಟಣೆ

**ಸಂಖ್ಯೆ: ಕರಾಆ: ಆಡಳಿತ:01,: 2007 (ಭಾಗ), ದಿನಾಂಕ:27ನೇ ಸೆಪ್ಟೆಂಬರ್, 2007**

ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆಗಳ ಸೇವೆಯ ಅಡಿಯಲ್ಲಿ ಇರುವ ಮೈಸೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಹಾಗೂ ದಾವಣಗೆರೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ (ಮಹಿಳಾ) ಸ್ಥಾನವು ರಾಜೀನಾಮೆಯಿಂದ ತೆರವಾಗಿರುವ: ತೆರವಾಗುವ ಪ್ರಯುಕ್ತ ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1) (ಬಿ)ರ ಅನ್ವಯ ಈ ಕೆಳಕಂಡಂತೆ

i. be not less than thirty-five years of age,

ii. possess a bachelor's degree from a recognized University,

iii. be persons of ability, integrity and standing, and have adequate knowledge and experience of at least ten years in dealing with problems relating to Economics, Law, Commerce, Accountancy, Industry, Public Affairs or Administration:

ವಿದ್ಯಾರ್ಹತೆ, ಅನುಭವ ಮತ್ತು ವಯಸ್ಸನ್ನು ಹೊಂದಿರುವ ಅರ್ಹ ಅಭ್ಯರ್ಥಿಗಳಿಂದ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಹ ಅಭ್ಯರ್ಥಿಗಳು ಅರ್ಜಿ ನಮೂನೆಯನ್ನು ಆಯಾ ಜಿಲ್ಲಾ ವೇದಿಕೆಯಿಂದ ಅಥವಾ ವೆಬ್‌ಸೈಟ್ http://kscdrc.kar.nic.in ಇಲ್ಲಿಂದ ಪಡೆದುಕೊಂಡು, ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ: 31.10.2007ರಂದು ಸಂಜೆ 5.00 ಗಂಟೆಯೊಳಗಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು–560 001 ಇಲ್ಲಿಗೆ ಸಲ್ಲಿಸುವುದು.

ನಿಗದಿತ ಅರ್ಜಿ ನಮೂನೆಯನ್ನು ಜಿಲ್ಲಾ ವೇದಿಕೆಯಿಂದ ರೂ.10.00 ಶುಲ್ಕ ಪಾವತಿ ಮಾಡಿ ಪಡೆದುಕೊಳ್ಳಬಹುದಾಗಿರುತ್ತದೆ ಅಥವಾ ವೆಬ್‌ಸೈಟ್‌ನಿಂದ ಉಚಿತವಾಗಿ ಪಡೆದುಕೊಳ್ಳಬಹುದಾಗಿರುತ್ತದೆ. ನಿಗದಿತ ಕಾಲಾವಧಿ ಮೀರಿ ಬರುವ ಯಾವುದೇ ಅರ್ಜಿಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗವು ಸ್ವೀಕರಿಸುವುದಿಲ್ಲ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು.

ಪಿ.ಆರ್. 1285

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಬಿ3: ಅಮೊ: ವಾಹನ–29/06–07, ದಿನಾಂಕ:29ನೇ ಸೆಪ್ಟೆಂಬರ್, 2007**

**ಉಪಸ್ಥಿತರು:** ಶ್ರೀ ಜಿ. ಜಯರಾಮಯ್ಯ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಬಾಧ್ಯತೆದಾರರು:** ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:10.03.2007ರಂದು ಆನಂದಪುರಂ ವಲಯದ ಚೋರಡಿಯ ತುಪ್ಪೂರು ಶಾಖೆಯ ವನಪಾಲಕ ಮತ್ತು ಇವರ ಸಿಬ್ಬಂದಿಯವರು ರಾತ್ರಿ ಗಸ್ತು ಮಾಡಿಕೊಂಡು ಬರುತ್ತಿರುವಾಗ ಬೆಳಗಿನ ಜಾವ 2–15ರ ವೇಳೆಯಲ್ಲಿ ಕೋಣೆಹೊಸೂರು ಹಿರೇಹರಕಕ್ಕೆ ಹೋಗುವ ರಸ್ತೆಯಲ್ಲಿ ಒಂದು ಬೈಕ್ ಬರುತ್ತಿರುವುದನ್ನು ಟಾರ್ಚ್ ಬೆಳಕಿನಿಂದ ಬೈಕನ್ನು ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರನ್ನು ನೋಡಿ ಬೈಕನ್ನು ಬಿಟ್ಟು ಪರಾರಿಯಾಗಿರುತ್ತಾನೆ. ನಂತರ ಬೈಕನ್ನು ಪರಿಶೀಲಿಸಿ ನೋಡಲಾಗಿ ಟಿವಿಎಸ್ ಬೈಕ್ ಕೆಎ–15–ಎಸ್–3590 ಆಗಿದ್ದು, ಈ ಬೈಕಿನ ಹಿಂಬದಿಯಲ್ಲಿ ಬಿಳಿ ಬಣ್ಣದ ಗೊಬ್ಬರದ ಚೀಲದಲ್ಲಿ ಏನೋ ಕಟ್ಟಿರುವುದು ಕಂಡುಬಂದು ಅದನ್ನು ಬಿಚ್ಚಿ ನೋಡಲಾಗಿ ಬೀಟೆ ಸೈಜ್ 1=0.010ಎಂ3 ಇದ್ದು, ಈ ಬೀಟೆ ಸೈಜ್ ಸಾಗಿಸಲು ಯಾವುದೇ ರಹದಾರಿ ಇರಲಿಲ್ಲ ಮತ್ತು ಈ ಸೈಜ್‌ಗಳ ಮೇಲೆ ಯಾವುದೇ ಇಲಾಖಾ ಛಾಪಾದ ಗುರುತು ಇರಲಿಲ್ಲ. ಆದ್ದರಿಂದ ಇದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24(ಎ) 62, 104(ಎ), 71(ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಉಪನಿಯಮ 144, 165ರ ಪ್ರಕಾರ ಉಲ್ಲಂಘನೆ ಆಗಿರುವುದರಿಂದ ವಾಹನ ಮತ್ತು ಬೀಟೆ ಸೈಜನ್ನು ಮಹಜರ್ ಕ್ರಮದಡಿ ಇಲಾಖಾ ಪರ ಜಪ್ತಿ ಮಾಡಿಕೊಂಡು ಆನಂದಪುರಂ ವಲಯ, ಚೋರಡಿಯ ಅರಣ್ಯ ಮೊಕದ್ದಮೆ ಸಂಖ್ಯೆ:145/ 06–07 ನ್ನು ದಾಖಲಿಸಿ ನಂತರ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಈ ನ್ಯಾಯಾಲಯದಿಂದ ಆದೇಶವಾಗಿದೆ.

ನಂತರ ಈ ವಾಹನವನ್ನು ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ–29/ 06–07 ದಿನಾಂಕ:23.03.2007 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರಿಗೆ ಪತ್ರ ಬರೆದು ಈ ವಾಹನವು ಯಾರ ಹೆಸರಿಗೆ ನೋಂದಣಿಯಾಗಿದೆ ಎನ್ನುವ ಬಗ್ಗೆ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಅದರಂತೆ ದಾವಣಗೆರೆ ಪ್ರಾದೇಶಿಕ ಸಾರಿಗೆ ಅಧಿಕಾರಿಯು ದಿನಾಂಕ:10.04.2007ರಂದು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಬಿ ಪ್ರತಿಯಲ್ಲಿನ ಆರ್.ಸಿ. ಮಾಲೀಕರ ಹೆಸರಿನಂತೆ ಶ್ರೀ ಬಿ.ಹೆಚ್. ಲಕ್ಷ್ಮೀಪತಿ ಬಿನ್ ಹನುಮಂತಪ್ಪ, 144, ಕುಲಗಟ್ಟೆ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರಿಗೆ ದಿನಾಂಕ:24.04.2007ರಂದು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ)ರ ಪ್ರಕಾರ ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿದೆ. ಕಾಲಾವಕಾಶ 30 ದಿನ ಕಳೆದರೂ ಆರ್.ಸಿ. ಮಾಲೀಕರು ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:04.08.2007ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ ನಾಟಾಗಳನ್ನು ಸಾಗಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ನಾಟಾವನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರು ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ ನಾಟಾಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:17.03.2007ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯನ್ನು ದಿನಾಂಕ:12.04.2007ರಂದು ಗೆಜೆಟ್‌ನಲ್ಲಿ ಪ್ರಕಟಗೊಂಡು 30 ದಿನಗಳಾದರೂ, ಆರ್.ಸಿ. ಮಾಲೀಕರಿಗೆ 71ಬಿ ಪ್ರಕಾರ ಕಾರಣ ಕೇಳಿ ಪತ್ರ ಜಾರಿ ಮಾಡಿ 30 ದಿನಗಳಾದರು, ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ಧವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಆನಂದಪುರಂ ವಲಯ, ಚೋರಡಿ ಇವರು ಜಪ್ತು ಮಾಡಿದ ವಾಹನ ಟಿವಿಎಸ್ ಸುಜುಕಿ ಕೆಎ–17 ಎಸ್–3590 ಮತ್ತು ಈ ವಾಹನದಲ್ಲಿದ್ದ ಬೀಟೆ ನಾಟಾ 01=0.010ಎಂ3 ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:29.09.2007ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾದ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಪಿ.ಆರ್. 1286 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಅಮೊ: ವಾಹನ–24/06–07, ದಿನಾಂಕ:29ನೇ ಸೆಪ್ಟೆಂಬರ್, 2007**

**ಉಪಸ್ಥಿತರು:** ಶ್ರೀ ಜಿ. ಜಯರಾಮಯ್ಯ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾಧಿದಾರರು:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ. (ಸಹಾಯಕ ಸರ್ಕಾರಿ ಅಭಿಯೋಜಕರು)

**ಆರೋಪಿಗಳು:** ಪತ್ತೆಯಾಗಿಲ್ಲ.

**ಭಾದ್ಯತೆದಾರರು:** ಯಾರು ಮುಂದೆ ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ:15.01.2007ರಂದು ಅರಣ್ಯ ಸಂಚಾರಿ ದಳ ಕಛೇರಿಗೆ ಬಂದ ಮಾಹಿತಿಯಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರ ಮಾರ್ಗದರ್ಶನದ ಮೇರೆಗೆ ಶಿಕಾರಿಪುರ ತಾಲ್ಲೂಕು ಶಿಕಾರಿಪುರದಿಂದ ಮಾಸೂರಿಗೆ ಹೋಗುವ ಪಿಡಬ್ಲ್ಯೂಡಿ ರಸ್ತೆಯ ಮಟ್ಟಿಕೋಟೆ ಕ್ರಾಸ್ ಬಳಿ ಪಂಚಾಯ್ತಿದಾರರ ಸಮಕ್ಷಮ ಇಲಾಖಾ ವಾಹನದಲ್ಲಿ ಸ್ಥಳಕ್ಕೆ ಹೋಗಿ ಕಾಯುತ್ತಿರುವಾಗ ಶಿಕಾರಿಪುರ ಕಡೆಯಿಂದ ಒಂದು ಹಸಿರು ಬಣ್ಣದ ಮಾರುತಿ ಓಮ್ನಿಯನ್ನು ತಪಾಸಣೆಗಾಗಿ ನಿಲ್ಲಿಸಲು ಸೂಚಿಸಿದರು ನಿಲ್ಲಿಸದೆ ವೇಗವಾಗಿ ಮುಂದೆ ಮಾಸೂರು ಕಡೆ ಹೋಗುತ್ತಿದ್ದರಿಂದ ಅನುಮಾನಗೊಂಡು ಇಲಾಖಾ ವಾಹನದಲ್ಲಿ ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದರು ಅಸಾಮಿಗಳು ವಾಹನವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ ವಾಹನದಿಂದ ಇಳಿದು ವಾಹನ ಬಿಟ್ಟು ಓಡಿ ಕೈಗೆ ಸಿಗದೆ ಪರಾರಿಯಾದರು. ನಂತರ ವಾಹನವನ್ನು ಪರಿಶೀಲಿಸಲಾಗಿ ಕೆಎ–18–ಎಂ–3022 ಛಾಸ್ಸಿಸ್ ನಂ.ST-91-IN-178839 ಇಂಜಿನ್ ನಂ.F8B-IN-1409 ಇದ್ದು, ಈ ಮಾರುತಿ ಓಮ್ನಿ ಒಳಗಡೆ ಬೀಟೆ ಮತ್ತು ಸಾಗುವಾನಿಯ ಪೀಠೋಪಕರಣಗಳ ಬಿಡಿ ಭಾಗಗಳಿದ್ದು, ಈ ತುಂಡುಗಳ ಮೇಲೆ ಯಾವುದೇ ಇಲಾಖೆಯ ಛಾಪಾದ ಗುರುತಿರಲಿಲ್ಲ ಹಾಗೂ ಸಾಗಿಸಲು ರಹದಾರಿ ಇರಲಿಲ್ಲ. ಅಲ್ಲದೇ ಇಲಾಖೆಯವರನ್ನು ನೋಡಿ ಓಮ್ನಿಯಲ್ಲಿದ್ದ ಅಸಾಮಿಗಳು ಓಡಿ ಹೋಗಿದ್ದರಿಂದ ಈ ತುಂಡುಗಳನ್ನು ಓಮ್ನಿಯಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡಲಾಗುತ್ತಿದೆ ಎಂದು ಪರಿಗಣಿಸಿ, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಇಲಾಖಾ ಪರ ಜಪ್ತುಮಾಡಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 50ಕೆ, 62, 104ಎ ಮತ್ತು ಕರ್ನಾಟಕ ಅರಣ್ಯ

ಕಾನೂನು 1969 ಉಪನಿಯಮ 144, 163, 165ರ ಪ್ರಕಾರ ಅಮೊ ಸಂಖ್ಯೆ: 62/ 06–07ನ್ನು ದಾಖಲಿಸಿ, ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಸದರಿ ವಾಹನವನ್ನು ಸುರಕ್ಷತೆಗಾಗಿ ಇಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ದಿಗೆ ಕೊಡಲು ಆದೇಶವಾಗಿದೆ.

ನಂತರ ಈ ವಾಹನದ ಆರ್.ಸಿ. ಮಾಲೀಕರ ಬಗ್ಗೆ ತಿಳಿಯಲು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ಒದಗಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರಿಗೆ ಈ ನ್ಯಾಯಾಲಯದ ಪತ್ರ ಸಂಖ್ಯೆ: ಬಿ3:ಅಮೊ:ವಾಹನ:24/06–07 ದಿನಾಂಕ:23.02.2007ರಲ್ಲಿ ಬರೆದು ಕೋರಲಾಗಿತ್ತು. ಅದರಂತೆ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರು ಈ ವಾಹನದ ಬಿ ಪ್ರತಿಯನ್ನು ಈ ನ್ಯಾಯಾಲಯಕ್ಕೆ ದಿನಾಂಕ:27.06.2007ರಂದು ಒದಗಿಸಿ ಈ ವಾಹನದ ಸಿ.ಸಿ.ಯನ್ನು ಸಾರಿಗೆ ಅಧಿಕಾರಿ, ಸಾಗರಕ್ಕೆ ದಿನಾಂಕ:17.11.2000ರಲ್ಲಿ ವರ್ಗಾಯಿಸಲಾಗಿದೆಯೆಂದು ತಿಳಿಸಿರುತ್ತಾರೆ. ಇದರ ಆಧಾರದ ಮೇಲೆ ಸಾರಿಗೆ ಅಧಿಕಾರಿ, ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಮ ಸಂಖ್ಯೆ: ದಿನಾಂಕ:30.06.2007 ಮತ್ತು ದಿನಾಂಕ:01.07.2007ರಲ್ಲಿ ಈ ವಾಹನದ ಬಿ ಪ್ರತಿಯನ್ನು ಒದಗಿಸಲು ಕೋರಲಾಗಿತ್ತು. ಅದರಂತೆ ಸಾರಿಗೆ ಅಧಿಕಾರಿ, ಸಾಗರ ಇವರು ದಿನಾಂಕ:10.08.2007ರಂದು ಈ ನ್ಯಾಯಾಲಯಕ್ಕೆ ಒದಗಿಸಿದ ಬಿ ಪ್ರತಿಯಲ್ಲಿ ನಮೂದಿಸಿದ ವಿಳಾಸವಾದ ಶ್ರೀ ನದೀಂ ಪಾಶಾ ಬಿನ್ ಸೈಯದ್ ಸುಲ್ತಾನ್ ಅಹ್ಮದ್, ಕಂಚುಹಾರಕೇರಿ, ಶಿಕಾರಿಪುರ ಇವರಿಗೆ ದಿನಾಂಕ:22.08.2007ರಂದು ಕಾರಣ ಕೇಳಿ ಪತ್ರವನ್ನು ನೊಂದಣಿ ಅಂಚೆ ಮೂಲಕ ಜಾರಿ ಮಾಡಿ 30 ದಿನಗಳೊಳಗೆ ಈ ವಾಹನದ ದಾಖಲೆಗಳೊಂದಿಗೆ ಈ ನ್ಯಾಯಾಲಯಕ್ಕೆ ಹಾಜರಾಗಲು ತಿಳಿಸಲಾಗಿತ್ತು. ಆದರೆ ನೊಂದಣಿ ಅಂಚೆ ಮೂಲಕ ಕಳುಹಿಸಿದ ಲಕೋಟೆ ಮೇಲೆ U/R RL was Returned to Sender ಎಂದು ನಮೂದಿಸಿ ಅಂಚೆ ಇಲಾಖೆಯವರು ಹಿಂದಿರುಗಿಸಿರುತ್ತಾರೆ. ಆದ್ದರಿಂದ ಈ ಕೆಳಗಿನಂತೆ ಮುಂದಿನ ಕ್ರಮ ಕೈಗೊಳ್ಳಲಾಯಿತು.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಪ್ರಕಟಣೆಯನ್ನು ದಿನಾಂಕ:17.03.2007ರಂದು ಹೊರಡಿಸಿ ಪ್ರತಿಯನ್ನು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಮತ್ತು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಬೆಂಗಳೂರು ಇವರಿಗೆ ಕಳುಹಿಸಿ ಹೆಚ್ಚು ಪ್ರಸಾರವಿರುವ ರಾಜ್ಯ ಮಟ್ಟದ ದೈನಿಕ ಪತ್ರಿಕೆಯಲ್ಲಿ ಮತ್ತು ಗೆಜೆಟ್‌ನಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ:12.04.2007ರಂದು ರಾಜ್ಯ ಪತ್ರದಲ್ಲಿ ಪ್ರಕಟಗೊಂಡು 30 ದಿನಗಳಾದರು, ಆರ್.ಸಿ. ಮಾಲೀಕರಿಗೆ 71ಬಿ ಪ್ರಕಾರ ಕಾರಣ ಕೇಳಿ ಪತ್ರ ಜಾರಿ ಮಾಡಿ 30 ದಿನಗಳಾದರು, ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಕಾನೂನುಬದ್ದವಾಗಿ ದಾಖಲೆಗಳನ್ನು ಅರ್ಜಿ ಮೂಲಕ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ಉಪಯೋಗಿಸಿಲ್ಲವೆನ್ನುವುದನ್ನು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ:01.09.2007ರಂದು ವಾದ ಮಂಡಿಸಿ ಈ ವಾಹನದಲ್ಲಿ ಬೀಟೆ, ಸಾಗುವಾನಿ ಸೈಜುಗಳನ್ನು ಸಾಗಿಸಿದ ಬಗ್ಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಮಹಜರ್ ಪ್ರತಿ ಮತ್ತು ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ, ಸಾಗುವಾನಿ ಸೈಜುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ವಾಹನ ಮಾಲೀಕರಾಗಲೀ ಅಥವಾ ಅವರ ಪ್ರತಿನಿಧಿಗಳಾಗಲೀ ಯಾರೂ ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡದಿರುವ ಬಗ್ಗೆ ಈ ನ್ಯಾಯಾಲಯಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ವಾಹನ ಮತ್ತು ಬೀಟೆ, ಸಾಗುವಾನಿ ಸೈಜುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದಲ್ಲಿನ ದಾಖಲೆಗಳನ್ನು ಪರಿಶೀಲಿಸಿ ಹಾಗೂ ವಾದವನ್ನು ಕೇಳಿ ಈ ಪ್ರಕರಣದ ವಿದ್ಯಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಜಿ. ಜಯರಾಮಯ್ಯ, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಅರಣ್ಯ ಸಂಚಾರಿ ದಳ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಹಸಿರು ಬಣ್ಣದ ಮಾರುತಿ ಓಮ್ನಿ ಕೆಎ–18–ಎಂ–3022 ಮತ್ತು ಈ ವಾಹನದಲ್ಲಿದ್ದ ಬೀಟೆ ಮತ್ತು ಸಾಗುವಾನಿ ಸೈಜು 22=0.110ಎಂ3 ಯು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ:29.09.2007 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ

ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಹಕ್ಕುಭಾಧ್ಯತೆ ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1287

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–1, ಕಾರ್ಮಿಕ ಭವನ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಡಬ್ಲ್ಯೂಸಿಎ/ ಎಫ್‌ಸಿ/ ಸಿಆರ್–46/ 2007, ದಿನಾಂಕ:29ನೇ ಸೆಪ್ಟೆಂಬರ್, 2007**

**ಅರ್ಜಿದಾರರು**

1) ಶ್ರೀನಾಗರಾಜ ಶೆಟ್ಟಿ, 50 ವರ್ಷ, ತಂದೆ: ಕರಿಶೆಟ್ಟಿ, (ಮೃತ ರವಿಚಂದ್ರನ ತಂದೆ)
2) ಶ್ರೀಮತಿ ನಾಗಮ್ಮ, 45 ವರ್ಷ, ಗಂಡ: ಶ್ರೀ ನಾಗರಾಜಶೆಟ್ಟಿ, (ಮೃತ ರವಿಚಂದ್ರನ ತಾಯಿ)
ಖಾಯಂ ವಿಳಾಸ: ಕಡಗ ಗ್ರಾಮ, ಬಳ್ಳೂರು ಅಂಚೆ, ಸಾಲಿಗ್ರಾಮ ಹೋಬಳಿ, ಕೆ.ಆರ್. ನಗರ (ತಾ) ಮೈಸೂರು ಜಿಲ್ಲೆ.
ಹಾಲಿ ವಿಳಾಸ: ನಂ.51:1, 6ನೇ ಮೈನ್ ರೋಡ್, ಪ್ರಶಾಂತನಗರ, ಬೆಂಗಳೂರು–79.

**ಪ್ರತಿವಾದಿಗಳು**

1) ದಿ ಮೇನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪೆನಿ ಲಿ., ಪಿ.ಐ.ಎ. ಭವನದ ಹತ್ತಿರ, ಪೀಣ್ಯ, ಬೆಂಗಳೂರು, 560058.
2) ಶ್ರೀ ಎಸ್. ವಿನೋದ್‌ಕುಮಾರ್, ತಂದೆ: ಕೆ. ಶ್ರೀನಿವಾಸಮೂರ್ತಿ, ಅಕ್ಷತಾ ನಿಲಯ, ವಿನೋದ್, ಇಂಗ್ಲೀಷ್ ಹೈಸ್ಕೂಲ್ ಹತ್ತಿರ, ಗೊರಗುಂಟೆ ಪಾಳ್ಯ, ಬೆಂಗಳೂರು.

**ಪ್ರಕಟಣೆ**

ಈ ಮೇಲೆ ನಮೂದಿಸಿರುವ ಅರ್ಜಿದಾರರು ತಾವು ಮೃತ ಶ್ರೀ ರವಿಚಂದ್ರ ಇವರ ಅವಲಂಬಿತರೆಂದು, ಮೃತನು 2ನೇ ಪ್ರತಿವಾದಿ ಬಳಿ ಕ್ಲೀನರ್ ಕೆಲಸ ಮಾಡುವಾಗ ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ:23.04.2005 ಮರಣ ಹೊಂದಿರುತ್ತಾರೆ ಎಂದು, ಈ ಸಂಬಂಧ ತಮಗೆ ಕಾಯ್ದೆಯ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ ಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೇ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹಾ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಹಾಗೂ ಕಾರ್ಮಿಕ ಅಧಿಕಾರಿ,
ಉಪವಿಭಾಗ–1, ಬೆಂಗಳೂರು.

ಪಿ.ಆರ್. 1288

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಸಂಖ್ಯೆ: ಡಬ್ಲ್ಯೂಸಿಎ/ ಎಸ್‌ಆರ್–100/ಎಫ್/ 2007, ದಿನಾಂಕ: ಸೆಪ್ಟೆಂಬರ್, 2007**

**ಅರ್ಜಿದಾರರು**

ಶ್ರೀ ಬಸಪ್ಪ ತಂದೆ ಹನಮಂತರಾಯ ವಗೇರಿ ಮತ್ತು ಇತರೆ 3 ಜನರು, ಸಾ: ಸಾಸನೂರ, ತಾ: ಬಿ. ಬಾಗೇವಾಡಿ, ಜಿಲ್ಲೆ: ಬಿಜಾಪುರ.

**ಪ್ರತಿವಾದಿಗಳು**

ದಿ ಮ್ಯಾನೇಜಿಂಗ್ ಡೈರೆಕ್ಟರ್ ಮೋಹನರಾವ ಶಿಂಧೆ, ಕೊ–ಆಪರೇಟಿವ್ ಶುಗರ್ ಫ್ಯಾಕ್ಟರಿ, ಅರ್ಗ, ತಾ: ಮೀರಜ್, ಜಿಲ್ಲೆ: ಸಾಂಗ್ಲಿ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಅಂಬಣ್ಣ ಬಸಪ್ಪ ವಗೇರಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:01.01.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪರ್ಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 1289 ಕಾರ್ಮಿಕ ಪರಿಹಾರ ಆಯುಕ್ತರು,

ಉಪವಿಭಾಗ–2, ಬಿಜಾಮರ ಜಿಲ್ಲೆ, ಬಿಜಾಮರ.

**ನಗರ ಯೋಜನಾ ಪ್ರಾಧಿಕಾರ, ಶಹಾಮರ**

**ಸಂಖ್ಯೆ: ನಯೋಪ್ರಾಶ: ಮಹಾಯೋಜನೆ (ಅಂತಿಮ): ಪ್ರಕಟಣೆ: 2007–08**

**ದಿನಾಂಕ:6ನೇ ಅಕ್ಟೋಬರ್, 2007**

**ಪ್ರಕಟಣೆ**

**ವಿಷಯ:** ಸರ್ಕಾರದಿಂದ ಅಂತಿಮ ಅನುಮೋದನೆಗೊಂಡಿರುವ ಶಹಾಮರ ಪಟ್ಟಣದ ಮಾಸ್ಟರ್ ಪ್ಲಾನ್ (ಮಹಾಯೋಜನೆ) ಅನ್ನು ರಾಜ್ಯಪತ್ರದಲ್ಲಿ ಪ್ರಕಟಿಸುವ ಬಗ್ಗೆ.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 4(ಸಿ) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 115 ಎಂಐಬಿ 99 ದಿನಾಂಕ:04.06.1999ರಂತೆ ಶಹಾಮರ ನಗರ ಯೋಜನಾ ಪ್ರಾಧಿಕಾರವೆಂದು ಕಾರ್ಯನಿರ್ವಹಿಸುತ್ತಿರುವ ಈ ಪ್ರಾಧಿಕಾರದಿಂದ ರೂಪಿಸಿರುವ ಶಹಾಮೂರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13 (3)ರನ್ವಯ ಸರ್ಕಾರದ ಆದೇಶ ಸಂಖ್ಯೆ: ನಅಇ 123 ಬೆಮಪ್ರಾ 2007, ಬೆಂಗಳೂರು, ದಿನಾಂಕ:15.06.2007ರಂದು ಅಂತಿಮ ಅನುಮೋದನೆ ನೀಡಿದೆ. ಅನುಮೋದಿತ ಮಹಾಯೋಜನೆಯ ನಕ್ಷೆ ಮತ್ತು ನಿಯಮಾವಳಿಗಳ ಪ್ರತಿಯನ್ನು ಸಾರ್ವಜನಿಕರ ಮಾಹಿತಿಗಾಗಿ ನಗರ ಯೋಜನಾ ನಿರ್ದೇಶಕರ ಕಾರ್ಯಾಲಯ ಬೆಂಗಳೂರು, ಹಾಗೂ ನಗರ ಯೋಜನಾ ಪ್ರಾಧಿಕಾರ ಕಾರ್ಯಾಲಯ ಶಹಾಮೂರದಲ್ಲಿ ಇಡಲಾಗಿದೆ.

ಸದಸ್ಯ ಕಾರ್ಯದರ್ಶಿ,

ಪಿ.ಡಿ. 114 ನಗರ ಯೋಜನಾ ಪ್ರಾಧಿಕಾರ, ಶಹಾಮೂರ.

**ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ ಅರಸೀಕೆರೆ ಗ್ರಾಮಾಂತರ ಪೊಲೀಸ್ ಠಾಣೆ, ಹಾಸನ ಜಿಲ್ಲೆ**

**ನಂ.: ಎ.ಎಸ್.ಕೆ. (ಗ್ರಾಮಾಂತರ) ಠಾಣೆ ಸಿ.ಸಿ.:18/07 ದಿನಾಂಕ:6ನೇ ಅಕ್ಟೋಬರ್, 2007**

**ವಿಷಯ:** ವಾರಸುದಾರರಿಲ್ಲದ/ ವಿಲೇವಾರಿಯಾಗದೇ ಉಳಿದಿರುವ ವಾಹನಗಳನ್ನು ಗೆಜೆಟ್‌ನಲ್ಲಿ ಪ್ರಕಟಿಸುತ್ತಿರುವ ಬಗ್ಗೆ.

ಈ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಅರಸೀಕೆರೆ (ಗ್ರಾ) ಠಾಣೆಯಲ್ಲಿ ಪ್ರಕರಣಗಳ ತನಿಖೆ ಕಾಲದಲ್ಲಿ ಈ ಕೆಳಕಂಡ ವಾಹನಗಳನ್ನು ಅಮಾನತ್ತುಪಡಿಸಿಕೊಳ್ಳಲಾಗಿದೆ. ಅಮಾನತ್ತು ಪಡಿಸಿರುವ ಕೆಳಕಂಡ 2 ಕಾರುಗಳನ್ನು ಅದರ ಮಾಲೀಕರು ಬಿಡಿಸಿಕೊಂಡಿರುವುದಿಲ್ಲ. ಹಾಗೂ ಮೋಟಾರ್ ಸೈಕಲ್‌ನ ಮಾಲೀಕರು ಪತ್ತೆಯಾಗಿರುವುದಿಲ್ಲ. ಈ ವಿವರಗಳನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.

| ಕ್ರ. ಸಂ. | ಮೊ.ನಂ./ ಸಿಮಿಸ್ ನಂ. | ಪಿ.ಎಫ್. ನಂ. | ನೊಂದಣಿ ಸಂಖ್ಯೆ | ಇಂಜಿನ್ ನಂ. | ಚಾಸಿಸ್ ನಂ. |
|---|---|---|---|---|---|
| 1. | ಸಿಮಿಸ್ 63/ 04 | 63/64 | ಕೆಎ–06–5390ರ ಹೀರೋ ಹೊಂಡಾ ಸಿ.ಡಿ.100 ಮೋಟಾರ್ ಸೈಕಲ್ | 941–ಐ.ಓ.ಇ.–03823 | 941–ಐ.ಓ.ಎಫ್.–01060 |
| 2. | ಮೊ.ನಂ.46/96 ಕಲಂ 279, 337 ಐ.ಪಿ.ಸಿ. | 58/96 | ಸಿ.ಎನ್.ಎಂ.–5115ರ ಅಂಬಾಸೆಡರ್ ಕಾರ್ | ಬಿ–366205 | 111–48619 ಜಿ.ಇ.ಎ–010335 |
| 3. | ಮೊ.ನಂ.89/98 ಕಲಂ 279, 337 ಐ.ಪಿ.ಸಿ. | 97/98 | ಎಂ.ಹೆಚ್.01–ಪಿ–413ರ ಕಂಟೆಸಾ ಕಾರ್ | – | – |

ಪೊಲೀಸ್ ಸಬ್‌ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ

ಪಿ.ಆರ್. 1313 (ಗ್ರಾ) ಪೊಲೀಸ್ ಠಾಣೆ, ಅರಸೀಕೆರೆ, ಹಾಸನ ಜಿಲ್ಲೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ ಜಿಲ್ಲೆ, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ: 350:07/631, ದಿನಾಂಕ:19ನೇ ಸೆಪ್ಟೆಂಬರ್, 2007**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀ ರಾಮಲಿಂಗಾರೆಡ್ಡಿ ತಂ: ಲೇಟ್ ಓಬಿ ರೆಡ್ಡಿ, ವಯಸ್ಸು:38 ವರ್ಷ.
2. ಶ್ರೀಮತಿ ಕಲಾವತಿ ಗಂ: ರಾಮಲಿಂಗಾರೆಡ್ಡಿ, ವಯಸ್ಸು: 36 ವರ್ಷ.
3. ಕು: ಶ್ಯಾಮಲ ತಂ: ರಾಮಲಿಂಗರೆಡ್ಡಿ, ವಯಸ್ಸು:16 ವರ್ಷ.
4. ಚಿ. ಚೆನ್ನಾರೆಡ್ಡಿ ತಂ: ರಾಮಲಿಂಗರೆಡ್ಡಿ ವಯಸ್ಸು:14 ವರ್ಷ, ಎಲ್ಲರ ವಾಸ: ನಕ್ಕಲಪಲ್ಲಿ ಗ್ರಾಮ, ಬೆಳಗುಪ್ಪ ಮಂಡಲ ಕಲ್ಯಾಣ ದುರ್ಗ (ತಾ) ಅನಂತಪುರ ಜಿಲ್ಲೆ, ಹಾಲಿ ಎಲ್ಲರ ವಾಸ: ವಿನಾಯಕ ನಗರ, ಬಳ್ಳಾರಿ.

ಪ್ರತಿವಾದಿಗಳು:

1. ಖಾದರ್ ವಲಿ ತಂ: ಎಸ್. ಖಾಲಿ ಸಾಹೆಬ್, ಲಾರಿ ಮಾಲೀಕರು, ಸಂಖ್ಯೆ:ಕೆಎ–40:2340 ಕೋಟೆ ಹಿಂದುಗಡೆ, ಸುಪ್ರಭಾತ ಥಿಯೇಟರ್, ಚಿಕ್ಕಬಳ್ಳಾಪುರ ಜಿಲ್ಲೆ.
   ಹಾಲಿ ವಾಸ: ಮನೆ ನಂ.1:1–795, ಇಂದಿರಾನಗರ, ಅನಂತಪುರ ಜಿಲ್ಲೆ, ಆಂಧ್ರಪ್ರದೇಶ.
2. ವಿಭಾಗೀಯ ವ್ಯವಸ್ಥಾಪಕರು, ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಶ್ರೀಮತಿ ರಾಮಲಿಂಗಾರೆಡ್ಡಿ ತಂ: ಓಬಿರೆಡ್ಡಿ, (2) ಶ್ರೀಮತಿ ಕಲಾವತಿ ಗಂ: ರಾಮಲಿಂಗಾರೆಡ್ಡಿ, (3) ಕು. ಶ್ಯಾಮಲ ತಂ: ರಾಮಲಿಂಗಾರೆಡ್ಡಿ (4) ಚಿ. ಚೆನ್ನಾರೆಡ್ಡಿ ತಂ: ರಾಮಲಿಂಗಾರೆಡ್ಡಿ ಇವರುಗಳು ತಾವು ಈಶ್ವರರೆಡ್ಡಿ ಇವರಿಗೆ ತಂದೆ–ತಾಯಿ ಹಾಗೂ ತಂಗಿ ಮತ್ತು ತಮ್ಮ ಆಗಬೇಕೆಂದು ದಿನಾಂಕ:27.08.2007ರಂದು ಕ್ಲೀನರ್‌ನಾಗಿ ಲಾರಿ ವಾಹನ ಸಂಖ್ಯೆ:ಕೆಎ–40:2340 ರಲ್ಲಿ ಕೆಲಸದಲ್ಲಿ ನಿರತನಾಗಿದ್ದು ಮೈನ್ಸ್ ಲೋಡ್ ಮದ್ರಾಸಿನಲ್ಲಿ ಅನ್‌ಲೋಡ್ ಮಾಡಲು ಹೋಗುವ ಸಮಯದಲ್ಲಿ ಕುಡಿತಿನಿ ಹತ್ತಿರ ತುಂಗಾಡಾಬಾದ ಹತ್ತಿರ ತಮ್ಮ ವಾಹನವನ್ನು ನಿಲ್ಲಿಸಿ ಊಟಕ್ಕೆ ಹೋಗುತ್ತಿರುವಾಗ ರಸ್ತೆಯಲ್ಲಿ ಒಂದು ಲಾರಿ ವೇಗವಾಗಿ ಬಂದು ಡಿಕ್ಕಿಹೊಡಿಸಿದ ಪರಿಣಾಮ ತೀವ್ರತರದ ಗಾಯಗಳಾಗಿ ವಿಮ್ಸ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಮರಣ ಹೊಂದಿದ್ದನೆಂದು ತಿಳಿಸುತ್ತಾ ಕೋರಿಕೆ ಅರ್ಜಿಯನ್ನು ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್. 1279

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ ಜಿಲ್ಲೆ, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ: 320:07/ಎಫ್.ಸಿ.644, ದಿನಾಂಕ:21ನೇ ಸೆಪ್ಟೆಂಬರ್, 2007**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀಮತಿ ಎಂ. ಮಂಜುಲ ಗಂಡ: ಲೇಟ್ ಶಿವಕುಮಾರ್, ವಯಸ್ಸು: 23 ವರ್ಷ, ವೃತ್ತಿ: ಗೃಹಿಣಿ, ವಾಸ: ರಾಮಸಾಗರ ಗ್ರಾಮ, ಹೊಸಪೇಟೆ (ತಾ), ಬಳ್ಳಾರಿ ಜಿಲ್ಲೆ.

ಪ್ರತಿವಾದಿಗಳು:

1. ಜಿ. ಜಯ್‌ಪ್ರಕಾಶ್ ತಂ: ನಾಗಯ್ಯ, ಛತ್ರಿ, ಶ್ರೀ ರಾಮನಗರ, ಕಂಟೋನ್‌ಮೆಂಟ್, ಕೌಸರ್ ಮಾಲೀಕರು ಸಂ: ಕೆಎ–34:6074, ಬಳ್ಳಾರಿ.
2. ದಿ. ಡಿವಿಜನಲ್ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಶ್ರೀಮತಿ ಎಂ. ಮಂಜುಲ ಕೋಂ ಲೇಟ್ ಶಿವಕುಮಾರ್, 23 ವರ್ಷ, ಗೃಹಿಣಿ, ವಾಸ: ರಾಮಸಾಗರ ಗ್ರಾಮ, ಆದ ತಾನು ಮೃತ ಶಿವಕುಮಾರ್ ಇವರ ಪತ್ನಿಯೆಂದು ಹಾಗೂ ಅವಲಂಬಿತರು ಎಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಿವಕುಮಾರ್ 1ನೇ ಪ್ರತಿವಾದಿಗಳಾದ ಬಿ. ಜಯಪ್ರಕಾಶ್ ಇವರ ಕೌಸರ್ ಕೆಎ–34:6074ರಲ್ಲಿ ಚಾಲಕನಾಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ:08.05.2007ರಂದು ವಾಹನ ಅಪಘಾತದಲ್ಲಿ

ಸ್ಥಳದಲ್ಲೇ ಗಾಯಗೊಂಡು ಮೃತ ಪಟ್ಟಿರುತ್ತಾರೆಂದು ಸದರಿ ಅರ್ಜಿದಾರಳು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆ ಸಲ್ಲಿಸತಕ್ಕದ್ದು. ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್. 1280

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/ 26/ ಚುನಾವ/ 2005, ಬೆಂಗಳೂರು, ದಿನಾಂಕ:25ನೇ ಸೆಪ್ಟೆಂಬರ್, 2007**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಕಾಯ್ದೆ, 1966ರ ಪ್ರಕರಣ 11ರ ಉಪ ಪ್ರಕರಣ (1) (viii)ರ ಪ್ರಕಾರ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/ 26/ ಚುನಾವ/ 2005, ದಿನಾಂಕ:07.01.2006ರಲ್ಲಿ ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಕಾರ್ಯದರ್ಶಿ, ಕೃಉಮಾಸ, ಬೆಂಗಳೂರು ಇವರನ್ನು ಹಾಗೂ ಗಂಗಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಹೆಚ್ಚುವರಿ ನಿರ್ದೇಶಕರು, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಇಲಾಖಾ ಪ್ರತಿನಿಧಿಯನ್ನಾಗಿ ನಾಮಕರಣ ಮಾಡಲಾಗಿರುತ್ತದೆ. ಪ್ರಸ್ತುತ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಆದೇಶವನ್ನು ಮಾರ್ಪಡಿಸಿ ಹಾಗೂ ಬೆಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಹೊಸದಾಗಿ ಚುನಾವಣೆ ನಡೆದಿರುವುದರಿಂದ ಮೇಲ್ಕಂಡ ಕಾಯ್ದೆಯ ಪ್ರಕರಣದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕನಾಗಿರುವ ಎಸ್. ಸೆಲ್ವಕುಮಾರ್ ಆದ ನಾನು, ಈ ಕೆಳಕಂಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಅವುಗಳ ಮುಂದೆ ಕಾಣಿಸಿರುವ ಅಧಿಕಾರಿಗಳನ್ನು ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ಬೆಂಗಳೂರು ನಗರ ಜಿಲ್ಲೆ | ಬೆಂಗಳೂರು (ಯಶವಂತಪುರ) | ಹೆಚ್ಚುವರಿ ನಿರ್ದೇಶಕರು (ಆಡಳಿತ), ಕೃಷಿ ಮಾರಾಟ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು. |
| 2. | ಕೊಪ್ಪಳ | ಗಂಗಾವತಿ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಯಶವಂತಪುರ, ಬೆಂಗಳೂರು. |
| 3. | ಮೈಸೂರು | ಮೈಸೂರು | ಹೆಚ್ಚುವರಿ ನಿರ್ದೇಶಕರು, ಕಾನೂನು ಜಾರಿಕೋಶ, ಕೃಷಿ ಮಾರಾಟ ಇಲಾಖೆ, ಬೆಂಗಳೂರು. |

**ಎಸ್. ಸೆಲ್ವಕುಮಾರ್**
ನಿರ್ದೇಶಕರು,
ಕೃಷಿ ಮಾರಾಟ ಇಲಾಖೆ.

ಪಿ.ಆರ್. 1281

**ಮುಖ್ಯ ಇಂಜಿನೀಯರರು, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರ ಕಾರ್ಯಾಲಯದ ನಡುವಳಿಗಳು**

**ವಿಷಯ:** ಹಾವೇರಿಯಲ್ಲಿ ಸರ್ಕಾರಿ ಇಂಜಿನೀಯರಿಂಗ್ ಕಾಲೇಜು ಕಟ್ಟಡದ ನಿರ್ಮಾಣಕ್ಕಾಗಿ ಟೆಂಡರ್ ಪರಿಶೀಲನಾ ಸಮಿತಿ ರಚಿಸುವ ಕುರಿತು.

**ಉಲ್ಲೇಖ:** ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಆಧ್ಯಾದೇಶ–2000.

**ಪೀಠಿಕೆ**

ಹಾವೇರಿಯಲ್ಲಿ ಸರ್ಕಾರಿ ಇಂಜಿನೀಯರಿಂಗ್ ಕಾಲೇಜು ಕಟ್ಟಡ ನಿರ್ಮಾಣ ಕಾಮಗಾರಿಗಳಿಗಾಗಿ ಈಗಾಗಲೇ ರೂ.3000.00 ಲಕ್ಷಗಳಿಗೆ ಅಂದಾಜು ಪತ್ರಿಕೆಗೆ ಆಡಳಿತಾತ್ಮಕ ಅನುಮೋದನೆ ಸರ್ಕಾರ ಪತ್ರ ಸಂಖ್ಯೆ: ಇಡಿ–60 ಟಿಇಸಿ–2007(2) ದಿನಾಂಕ:17.02.2007 ಅಡಿ ಮಂಜೂರಾತಿ ದೊರೆತಿದೆ. ಸದರಿ ಕಾಮಗಾರಿ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ಹಾವೇರಿ ಇವರ ಕಾರ್ಯಾಲಯದ ಟೆಂಡರ್ ನೋಟಿಫಿಕೇಶನ್ ಪತ್ರ ಸಂಖ್ಯೆ: ಇಇ:

ಪಿಡಬ್ಲ್ಯೂಡಿ–ಹಾವೇರಿ:ಪಿಬಿ–1: ಟೆಂಡರ್: ಇಂಜಿನೀಯರಿಂಗ್ ಕಾಲೇಜು:2007:1767 ದಿನಾಂಕ:04.08.2007 ಅಡಿ ರೂ.3000–00 ಲಕ್ಷಗಳಿಗೆ ಟೆಂಡರ್ ಕರೆಯಲಾಗಿದೆ.

ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಕೆಟಿಪಿಪಿ ರೂಲ್ಸ್ 2000 ನಿಯಮ 20 ಅಡಿ ಸೂಚಿಸಿರುವಂತೆ ಟೆಂಡರ್ ದಸ್ತಾವೇಜುಗಳ ಪರಿಶೀಲನೆ, ಟೆಂಡರ್ ತೆರೆಯುವ ಪ್ರಕ್ರಿಯೆ ಮೇಲ್ವಿಚಾರಣೆ, ಸ್ವೀಕೃತ ಟೆಂಡರ್‌ಗಳ ಪ್ರಾಥಮಿಕ ಪರಿಶೀಲನೆ ಹಾಗೂ ಗುತ್ತಿಗೆದಾರರ ಮೌಲ್ಯಮಾಪನ ವರದಿಯನ್ನು ಟೆಂಡರ್ ಅಂಗೀಕರಿಸುವ ಪ್ರಾಧಿಕಾರದ ಪರಿಗಣನೆಗೆ ಒಪ್ಪಿಸುವ ಕೆಲಸವನ್ನು ನಿರ್ವಹಿಸಬೇಕಾಗಿದೆ.

ಇದಲ್ಲದೆ ಗುತ್ತಿಗೆ ಮೊತ್ತ ರೂ.5.00 ಕೋಟಿಗಳಿಗಿಂತ ಹೆಚ್ಚಿಗೆಯಾದಲ್ಲಿ ಟೆಂಡರ್ ಅಂಗೀಕರಿಸುವ ಪ್ರಾಧಿಕಾರ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸುವ ಅಗತ್ಯವಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

ಮುಖ್ಯ ಇಂಜಿನೀಯರರ ಕಛೇರಿ,
ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ.

**ಆದೇಶ**

**ಸಂಖ್ಯೆ: ಸಿಇಎನ್:ತಾಸ–1: ಸಇಂ–1: ಹಾವೇರಿ: ಇಂಕಾಲೇಜು:07–08/ನಂ.07203, ದಿನಾಂಕ:25ನೇ ಸೆಪ್ಟೆಂಬರ್, 2007**

ಮೇಲೆ ಪೀಠಿಕೆಯಲ್ಲಿ ವಿವರಿಸಿರುವಂತೆ ಹಾವೇರಿಯಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ನಿರ್ಮಾಣದ ಕಟ್ಟಡ ನಿರ್ಮಾಣದ ಟೆಂಡರ್ ಪ್ರಕ್ರಿಯೆಯನ್ನು ನಿರ್ವಹಿಸಲು ಈ ಕೆಳಗೆ ನಮೂದಿಸಿರುವ ಅಧಿಕಾರಿಗಳನ್ನೊಳಗೊಂಡ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸಲಾಗಿದೆ.

1. ಶ್ರೀ ಪ್ರಭಾಕರ ಹೆಚ್. ಚಿಣಿ — ಅಧ್ಯಕ್ಷರು
   ಮುಖ್ಯ ಇಂಜಿನೀಯರರು
   ಸಂಪರ್ಕ ಮತ್ತು ಕಟ್ಟಡ (ಉ) ಧಾರವಾಡ.
2. ಶ್ರೀ ಜಗಲಾಸರ — ಸದಸ್ಯರು
   ಅಧೀಕ್ಷಕ ಇಂಜಿನೀಯರರು
   ಲೋ.ಇ. ವೃತ್ತ, ಧಾರವಾಡ.
3. ಶ್ರೀ ಆರ್.ಸಿ. ಕುಲಕರ್ಣಿ — ಸದಸ್ಯರು
   ಉಪ–ಮುಖ್ಯ ಇಂಜಿನೀಯರರು–2
   ಕೇಂದ್ರ ಕಾರ್ಯಾಲಯ, ಧಾರವಾಡ.
4. ಶ್ರೀ ಎಸ್.ಎಸ್. ಸೂಲಿಗಾವಿ, — ಸದಸ್ಯರು
   ಉಪ–ಮುಖ್ಯ ಇಂಜಿನೀಯರರು–1
   ಕೇಂದ್ರ ಕಾರ್ಯಾಲಯ, ಧಾರವಾಡ.
5. ಶ್ರೀ ಷಡಾಕ್ಷರಯ್ಯ — ಸದಸ್ಯರು
   ಲೆಕ್ಕಾಧಿಕಾರಿಗಳು, ಕೇಂದ್ರ ಕಾರ್ಯಾಲಯ, ಧಾರವಾಡ.
6. ಶ್ರೀ ರಾಜಶೇಖರ ಎಲಿಗಾರ — ಸದಸ್ಯರು
   ಕಾರ್ಯನಿರ್ವಾಹಕ ಇಂಜಿನೀಯರರು
   ಲೋ.ಇ. ವಿಭಾಗ, ಧಾರವಾಡ.
7. ಶ್ರೀ ಎಸ್.ಬಿ. ಜೋಡಳ್ಳಿ — ಸದಸ್ಯರು
   ತಾಂತ್ರಿಕ ಸಹಾಯಕರು, ಕೇಂದ್ರ ಕಾರ್ಯಾಲಯ, ಧಾರವಾಡ.
8. ಶ್ರೀ ಸಿ.ಆರ್. ಬಳ್ಳಾರಿ — ಸದಸ್ಯರು–ಕಾರ್ಯದರ್ಶಿಗಳು
   ಕಾರ್ಯನಿರ್ವಾಹಕ ಇಂಜಿನೀಯರರು,
   ಲೋ.ಇ. ವಿಭಾಗ, ಹಾವೇರಿ.

ಮುಖ್ಯ ಇಂಜಿನೀಯರರು,
ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ.

ಪಿ.ಆರ್. 1282

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಸಂಖ್ಯೆ: ಕಾಅಕೊ/ ಕಾನಪ/ 61/ 2007, ದಿನಾಂಕ:24ನೇ ಫೆಬ್ರವರಿ, 2007**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಭೀಮವ್ವ ಗಂಡ ಹಿರೇಹನುಮಪ್ಪ ಹೂಲಗಿರಿ, ಸಾ: ಹನಮಗಿರಿ, ತಾ:ಕುಷ್ಟಗಿ, ಜಿ: ಕೊಪ್ಪಳ.

1. ಶ್ರೀಮತಿ ನೂರಜಾನ್ ಗಂಡ: ಮುರ್ತುಜಾಸಾಬ ಲೋಲಕಲ್, ಸಾ: ಹನುಮಸಾಗರ, ತಾ: ಕುಷ್ಟಗಿ, ಜಿ:ಕೊಪ್ಪಳ.
2. ಡಿವಿಜನಲ್ ಮ್ಯಾನೇಜರ್, ಮೆ: ನ್ಯಾಶನಲ್ ಇನ್ಸುರೆನ್ಸ್ ಕಂ.ಲಿ., ಗುಲ್ಬರ್ಗಾ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶರಣಪ್ಪ ತಂದೆ: ಹಿರೇಹನುಮಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.05.2005ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಶ್ರೀಮತಿ ಭೀಮವ್ವ ಗಂಡ ಹಿರೇಹನುಮಪ್ಪ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 447

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕಟಣೆ**

**ಸಂಖ್ಯೆ: ಕಾಅಕೊ/ ಕಾನಪ/ 63/ 2007, ದಿನಾಂಕ:24ನೇ ಫೆಬ್ರವರಿ, 2007**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಕಳಕವ್ವ ಗಂಡ: ಹನುಮಂತ @ ಹನುಮಪ್ಪ ಪೂಜಾರ್, ಸಾ: ಹನಮಗಿರಿ, ತಾ: ಕುಷ್ಟಗಿ ಜಿ: ಕೊಪ್ಪಳ.
2. ಕವಿತಾ ತಂದೆ ಹನುಮಂತ ಪೂಜಾರ್,
3. ಸವಿತಾ ತಂದೆ: ಹನುಮಂತ ಪೂಜಾರ್,
4. ಮಹಾಂತೇಶ ತಂದೆ:ಹನುಮಂತ ಪೂಜಾರ್,
5. ಲಕ್ಷ್ಮವ್ವ ಗಂಡ ನಿಂಗಪ್ಪ ಪೂಜಾರ್.

1. ಶ್ರೀಮತಿ ನೂರಜಾನ್ ಗಂಡ: ಮುರ್ತುಜಾಸಾಬ ಲೋಲಕಲ್, ಸಾ: ಹನುಮಸಾಗರ, ತಾ: ಕುಷ್ಟಗಿ, ಜಿ:ಕೊಪ್ಪಳ.
2. ಡಿವಿಜನಲ್ ಮ್ಯಾನೇಜರ್, ಮೆ: ನ್ಯಾಶನಲ್ ಇನ್ಸುರೆನ್ಸ್ ಕಂ.ಲಿ., ಗುಲ್ಬರ್ಗಾ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಹನುಮಂತ @ ಹನುಮಪ್ಪ ತಂದೆ: ನಿಂಗಪ್ಪ ಪೂಜಾರ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.05.2005ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಕಳಕವ್ವ, ಕವಿತಾ, ಸವಿತಾ ಮಹಾಂತೇಶ ಮತ್ತು ಲಕ್ಷ್ಮವ್ವ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 448

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

### ಪ್ರಕಟಣೆ

**ಸಂಖ್ಯೆ: ಕಾಅಕೊ/ ಕಾನಪ/ 171/ 2007, ದಿನಾಂಕ:26ನೇ ಮಾರ್ಚ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಯಮನೂರಸಾಬ ತಂದೆ: ಪೀರಸಾಬ ಇಲಾದ್ ಕಣ್ಣವರ್, ಸಾ: ತಳಕಲ್, ತಾ: ಯಲಬುರ್ಗಾ.<br>2. ಅಲಿಮಾಬಿ ಗಂಡ: ಯಮನೂರಸಾಬ ಇಲಾದ್ ಕಣ್ಣವರ್, ಸಾ: ತಳಕಲ್.<br>3. ಫಕೀರಬಿ ತಂದೆ: ಯಮನೂರಸಾಬ, ಸಾ:ತಳಕಲ್. | | 1. ಶ್ರೀ ಇಬ್ರಾಹಿಂಸಾಬ ತಂದೆ: ಮೆಹೆಬೂಬಸಾಬ ಸಗರಿ, ಸಾ: ಸುಭಾಷ ನಗರ, ದೇವರಗುಡಿಹಾಳ್ ರೋಡ್, ಹಳೇ ಹುಬ್ಬಳ್ಳಿ.<br>2. ದಿ ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಸ್ಸುರೆನ್ಸ್ ಕಂ. ಲಿ., ಬಳ್ಳಾರಿ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ರಾಜೇಸಾಬ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:11.01.2007ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಯಮನೂರಸಾಬ, ಅಲಿಮಾಬಿ ಮತ್ತು ಫಕೀರಬಿ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ಪಿ.ಆರ್. 449 ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

## ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ

### ಪ್ರಕಟಣೆ

**ಸಂಖ್ಯೆ: ಕಾಅಕೊ/ ಕಾನಪ/ 172/ 2007, ದಿನಾಂಕ:26ನೇ ಮಾರ್ಚ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ನೀಲಮ್ಮ ಗಂಡ: ಸಣ್ಣ ಯಮನಪ್ಪ @ ಕೆಂಪಣ್ಣ, ತಂದೆ: ಮಾನಪ್ಪ ಕಲ್‌ಭಾವಿ, ಸಾ:ಬುಡಕುಂಟಿ.<br>2. ಮಲ್ಲಮ್ಮ ತಂದೆ ಸಣ್ಣ ಯಮನಪ್ಪ,<br>3. ರಮೇಶ ತಂದೆ: ಸಣ್ಣ ಯಮನಪ್ಪ,<br>4. ರಾಧಿಕಾ ತಂದೆ: ಸಣ್ಣ ಯಮನಪ್ಪ,<br>5. ಮಾನಪ್ಪ ತಂದೆ ಕಾಳಪ್ಪ,<br>6. ದುರುಗಮ್ಮ ಗಂಡ: ಮಾನಪ್ಪ ಸಾ: ಬುಡಕುಂಟಿ, ತಾ: ಯಲಬುರ್ಗಾ, ಜಿ: ಕೊಪ್ಪಳ. | | 1. ಶ್ರೀಮತಿ ಧಾನ್ಯಲಕ್ಷ್ಮೀ ಗಂಡ: .ಪಿ.ಡಿ ಮುನಿಸ್ವಾಮಿ, ಸಾ:ವಿರುಪಾಪುರ, ತಾ: ಗಂಗಾವತಿ.<br>2. ದಿ ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಸುರನ್ಸ್ ಕಂ.ಲಿ., ಬಳ್ಳಾರಿ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಸಣ್ಣ ಯಮನಪ್ಪ @ ಕೆಂಪಣ್ಣ ತಂದೆ: ಮಾನಪ್ಪ ಕಲ್ಬಾವಿ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:05.10.2006ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ನೀಲಮ್ಮ, ಮಲ್ಲಮ್ಮ, ರಮೇಶ, ರಾಧಿಕಾ, ಮಾನಪ್ಪ ಮತ್ತು ದುರುಗಮ್ಮ ಎಂಬುವವರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ
ಪಿ.ಆರ್. 450 ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ: ಎಫ್:31: 108: 2007, ದಿನಾಂಕ:4ನೇ ಏಪ್ರಿಲ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಗೌರವ್ವಾ ಕೋಂ ವೀರಯ್ಯ, ಕುಬ್ಬಿಹಾಳಮಠ, ಸಾ: ಗುರುವಿನಹಳ್ಳಿ, ತಾ: ಕುಂದಗೋಳ, ಸದ್ಯ: ಶಿಗ್ಗಾಂವ, ಜಿಲ್ಲೆ: ಹಾವೇರಿ. 2. ಕು: ಕಾವ್ಯ ತಂದೆ ಕಾಳಯ್ಯ ಕುಬ್ಬಿಹಾಲಮಠ, 3. ಶಾಂತಯ್ಯ ವೀರಯ್ಯ ಕುಬ್ಬಿಹಾಳಮಠ. | | 1. ಮೇನೇಜಿಂಗ್ ಡೈರೆಕ್ಟರ್, ಮೆಸರ್ಸ್ ಶಂಕೇಶ್ವರ ಮಿನರಲ್ ಪ್ರೈ ಲಿಮಿಟೆಡ್, ಎಟ್: ವರೂರ, ತಾ:ಹುಬ್ಬಳ್ಳಿ. 2. ದಿ ಮೇನೇಜರ್, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಎನ್ಕೇ ಕಾಂಪ್ಲೆಕ್ಸ್, ಕೇಶ್ವಾಪುರ, ಹುಬ್ಬಳ್ಳಿ. |

**ಪ್ರಕಟಣೆ**

ಶ್ರೀಮತಿ ಗೌರವ್ವಾ ಕೋಂ ವೀರಯ್ಯ ಕುಬ್ಬಿಹಾಳಮಠ, ಹಾಗೂ ಇನ್ನಿತರಿಬ್ಬರು ಸಾ: ಗುರುವಿನಹಳ್ಳಿ, ತಾ: ಕುಂದಗೋಳ, ಸದ್ಯ: ಶಿಗ್ಗಾಂವ, ಇವರುಗಳಾದ ತಾವು ಮೃತ ಕಾಳಯ್ಯ ಕುಬ್ಬಿಹಾಳಮಠ ಇವರ ತಾಯಿ, ಮಗಳು ಮತ್ತು ಸಹೋದರ ಎಂದು, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕಾಳಯ್ಯ ಕುಬ್ಬಿಹಾಳಮಠ ಇವರು ಒಂದನೇ ಪ್ರತಿವಾದಿಗಳಾದ ಮೇನೇಜಿಂಗ್ ಡೈರೆಕ್ಟರ್, ಮೆಸರ್ಸ್ ಶಂಕೇಶ್ವರ ಮಿನರಲ್ಸ್ ಪ್ರೈ ಲಿ. ಹುಬ್ಬಳ್ಳಿ, ವರೂರ ಗೂಡ್ಸ್ ವೆಹಿಕಲ್‌ನಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪಿ.ಆರ್. 479 ಪರಿಹಾರ ಆಯುಕ್ತರು, ಹಾವೇರಿ ಜಿಲ್ಲೆ, ಹಾವೇರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಸಂಖ್ಯೆ: ಡಬ್ಲ್ಯೂ.ಸಿ.ಎ: ಎಫ್: ಎಸ್.ಆರ್ 56: 2007, ದಿನಾಂಕ:7ನೇ ಏಪ್ರಿಲ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಬಿಸಮಿಲ್ಲಾ ಕೋಂ ಅಲ್ಲಾಭಕ್ಷ ಅವಟಿ, ಮತ್ತು ಇತರೆ 3 ಜನರು, ಸಾ: ಬಸವನ ಬಾಗೇವಾಡಿ, ಜಿಲ್ಲೆ: ಬಿಜಾಪುರ. | | 1. ಶ್ರೀ ಚಂದ್ರಶೇಖರ ತಂದೆ ಶಂಕರಪ್ಪ ಚವಾನ, ಸಾ: ಶಿರೂರ, ತಾ: ಜಿ: ಬಾಗಲಕೋಟೆ. 2. ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಅಲ್ಲಾಭಕ್ಷ ತಂದೆ ಲಾಲಸಾಬ ಅವಟಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:20.03.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೆ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಹಾಗೂ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–2, ಬಿಜಾಪುರ.

ಪಿ.ಆರ್. 481

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಸಂಖ್ಯೆ: ಡಬ್ಲ್ಯೂ.ಸಿ.ಎ: ಎಫ್: ಎಸ್.ಆರ್ 57: 2007, ದಿನಾಂಕ:7ನೇ ಏಪ್ರಿಲ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಪಾರ್ವತೆವ್ವ ಕೋಂ ಭೀಮಪ್ಪ ಇಂಡಿ, ಸಾ:ಮುತಗಿ, ತಾ:ಬಿ.ಬಾಗೇವಾಡಿ. | | 1. ಹಾಜಿಅಲಿ ತಂದೆ ಬಂದಗಿಸಾಬ ಮುಲ್ಲಾ, ಸಾ:ಕೃಷ್ಣಾ ನಗರ ಪಿಡಿಜೆ ಹೈಸ್ಕೂಲ್ ಹತ್ತಿರ, ಬಿಜಾಪುರ.<br>2. ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಮುದ್ದಪ್ಪ ತಂದೆ:ಭೀಮಪ್ಪ ಇಂಡಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:01.03.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೆ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಹಾಗೂ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**
ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–2, ಬಿಜಾಪುರ.

ಪಿ.ಆರ್. 482

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂ.ಸಿ.ಎ: ಎಸ್.ಆರ್ 54: 2007, ದಿನಾಂಕ:7ನೇ ಏಪ್ರಿಲ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಲಕ್ಷ್ಮಿಬಾಯಿ ಕೋಂ ಈಶ್ವರಪ್ಪ ಬಿರಾದರ್ ಉರ್ಫ್ ಹುಣಶ್ಯಾಳ, ಸಾ:ಹುಣಶ್ಯಾಳ, ತಾ: ಜಿ: ಬಿಜಾಪುರ, ಮತ್ತು ಇತರರು. | | 1. ಶ್ರೀ ರಾಮಣ್ಣ ತಂದೆ ಕಾಶಿರಾಯ ಕುಮಾರ, ಸಾ:ಕರಡಿ ತೋಟಾ ನವಬಾಗ, ಬಿಜಾಪುರ.<br>2. ದಿ ಬ್ರ್ಯಾಂಚ್ ಮ್ಯಾನೇಜರ್, ದಿ ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸುರೇಶ ತಂದೆ: ಈಶ್ವರಪ್ಪ ಬಿರಾದರ್ ಉರ್ಫ್ ಹುಣಶ್ಯಾಳ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ

ದಿನಾಂಕ:02.12.2006 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೆ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಹಾಗೂ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಜಿ. ಸಿದ್ದಲಿಂಗಪ್ಪ ಆಲೂರು

ಪಿ.ಆರ್. 483

ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ–2, ಬಿಜಾಪುರ.

**PUBLIC NOTICE**

**ARUN UDAI PRECISION PRODUCTS PRIVATE LIMITED**

**No. 13/2, III Main Road, Mathikere, Bangalore – 560054**

Notice is hereby given for general information that the members of ARUN UDAI PRECISION PRODUCTS PRIVATE LIMITED at an Extra Ordinary General Meeting of the Company held on 12.10.07 at its Registered Office, have passed the following special resolutions to wind up the company voluntarily:

"RESOLVED THAT pursuant to the provisions of section 484(1)(b), consent of the shareholders be and is hereby given for winding up the company.

"RESOLVED FURTHER that Mr. Sham Sunder be and is hereby appointed as Liquidator of the company for the purpose of winding up on a remuneration of Rs 5000/- plus out of pocket expenses at actual.

RESOLVED FURTHER that Mr. Sham Sunder, the Liquidator be and is hereby empowered to exercise all powers as provided in sub clauses (i) to (iv) of sub section (2) of section 457 of the Companies Act, 1956."

Date: 12.10.07 Liquidator

**FORM NO. 151**

**(See rule 315)**

**Members' (or Creditor's) Voluntary Winding up**

**Notice of appointment of liquidator pursuant to section 516**

Name of company: **ARUN UDAI PRECISION PRODUCTS PRIVATE LIMITED**

Nature of business: handling all kinds of precision metal components, light engineering goods and FRP items

Address of Registered Office: No. 13/2, III Main Road, Mathikere, Bangalore – 560 054

Name(s) and address (es) of Liquidator(s): Mr. Sham Sunder, No. 403, 12th Main Road, RMV Extension, Sadashivnagar, Bangalore – 560080

Date of appointment: 12.10.07

By whom appointed: Shareholders at their meeting held on 12th October 2007

Date: 12.10.07 Liquidator.

PD-115